ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 21 ನೇ ಸೆಪ್ಟೆಂಬರ್, 2020

ಮಧ್ಯಾಹ್ನದ ಬಿಸಿಯೂಟ ಕಾರ್ಯಕ್ರಮದಡಿ ಕೆಲಸ ನಿರ್ವಹಿಸುತ್ತಿರುವ ನೌಕರರಿಗೆ ಸಂಬಳ ನೀಡದಿರುವ ಕುರಿತು

ಶ್ರೀ ಕೆ. ಗೋವಿಂದರಾಜ್(ವಿಧಾನಸಭೆಯಿಂದ ಚುನಾಯಿತರಾದವರು) –

24 (108) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ರಾಜ್ಯದಲ್ಲಿ ಮಧ್ಯಾಹ್ನದ ಬಿಸಿಯೂಟ (Midday Meal) ಕಾರ್ಯಕ್ರಮದಡಿ ಕೆಲಸ ನಿರ್ವಹಿಸುತ್ತಿರುವ ನೌಕರರಿಗೆ ಕಳೆದ ಏಪ್ರಿಲ್ ತಿಂಗಳಿನಿಂದ ಸಂಬಳ ನೀಡದಿರುವುದು ನಿಜವೇ;

(ಆ) ಈ ಅರೆಕಾಲಿಕ ನೌಕರರ ಸಂಬಳ ತಿಂಗಳಿಗೆ ರೂ. 2,600/- ರಿಂದ ರೂ. 2,700 ಆಗಿದ್ದು, ಕೋವಿಡ್-19ರ ಐಸೋಲೇಷನ್ ಕೇಂದ್ರಗಳಲ್ಲಿ ಕೆಲಸ ನಿರ್ವಹಿಸಿದ್ದು, ವಿದ್ಯಾರ್ಥಿಗಳಿಗೆ ಆಹಾರ ಪದಾರ್ಥಗಳ ಕಿಟ್‌ಗಳನ್ನು ಹಂಚಿಕೆ ಮಾಡಿದ್ದರೂ ಇವರುಗಳಿಗೆ ಮಿಡ್ ಡೇ ಸಂಬಳವನ್ನಾಗಲೀ ಅಥವಾ ಲಾಕ್‌ಡೌನ್ ಸಂಬಂಧದ ಪರಿಹಾರವನ್ನಾಗಲೀ ನೀಡಿಲ್ಲದಿರುವುದಕ್ಕೆ ಕಾರಣಗಳೇನು; (ವಿವರ ನೀಡುವುದು)

(ಇ) ಇವರುಗಳನ್ನು ಪೂರ್ಣಕಾಲಿಕ ನೌಕರರೆಂದು ಪರಿಗಣಿಸಿ, ಕನಿಷ್ಠ ಸಂಬಳ, ಸೇವಾ ಭದ್ರತೆ, ಆರೋಗ್ಯ ಭತ್ಯೆ ಹಾಗೂ ಪಿಂಚಣಿ ಸೌಲಭ್ಯ ದೊರಕಿಸಿಕೊಡುವುದು ಮುಖ್ಯವಾಗಿದ್ದು, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮವೇನು? (ವಿವರ ನೀಡುವುದು)